# ನಮ್ಮ ಕೆರೆಗಳ ರಕ್ಷಣೆ | ತರಗತಿಯೊಳಗೆ ಒಂದು ಸಂವಾದ

ಅಂಜು ದಾಸ್ ಮಾಣಿಕ್‌ಪುರಿ

ಕೊಠಾರಿ ಆಯೋಗದಿಂದ (Kothari Commission) ಹಿಡಿದು ಹೊಸ ಶಿಕ್ಷಣ ನೀತಿಯ (New Education Policy - NEP) ತನಕ ಅನೇಕ ನೀತಿಗಳು ಮೂಲಭೂತ ಶಿಕ್ಷಣವನ್ನು ಪರಿಸರ ಮತ್ತು ಜನರ ಬದುಕಿನ ಅಗತ್ಯತೆಗಳು ಹಾಗೂ ಆಕಾಂಕ್ಷೆಗಳೊಂದಿಗೆ ಬೆಸೆಯಬೇಕು ಎಂದು ಶಿಫಾರಸ್ಸು ಮಾಡಿವೆ. ಪರಿಸರ ಕುರಿತು ಚಿಂತಿಸಲು ಮತ್ತು ಜವಾಬ್ದಾರಿಯುತ ನಾಗರಿಕರಾಗಲು ಮಕ್ಕಳನ್ನು ತರಬೇತುಗೊಳಿಸುವಲ್ಲಿ ಶಿಕ್ಷಕರು ಮಹತ್ವದ ಪಾತ್ರ ವಹಿಸುತ್ತಾರೆ. ಪರಿಸರ ಕುರಿತ ಸಾಕ್ಷರತೆ ಹಾಗೂ ಇದನ್ನು ಉತ್ತೇಜಿಸುವ ಶಿಕ್ಷಕರ ಪ್ರಯತ್ನಗಳು ಒಗ್ಗೂಡಿದಾಗ ಇದು ಪರಿಸರದ ಬಗ್ಗೆ ಜಾಗೃತಿಯನ್ನು ಹೆಚ್ಚಿಸುವ ಸಂವಾದ ನಡೆಸಲು ಅವಕಾಶಗಳನ್ನು ಕಲ್ಪಿಸುತ್ತದೆ.

ಸರ್ಕಾರಿ ಶಾಲೆಗಳಲ್ಲಿ ಉತ್ತಮ ಶಿಕ್ಷಣವನ್ನು ಖಾತ್ರಿಪಡಿಸಲು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ, ಶಿಕ್ಷಕರೊಂದಿಗೆ ನಿಕಟವಾಗಿ ಕೆಲಸ ಮಾಡುತ್ತಿದೆ. ಮಕ್ಕಳು ಉತ್ತಮ ಕಲಿಕಾ ಫಲಿತಾಂಶಗಳನ್ನು ಸಾಧಿಸುವಂತಾಗಲು ಫೌಂಡೇಷನ್‌ನ ಸದಸ್ಯರು ತರಗತಿಗಳಲ್ಲಿ ಶಿಕ್ಷಕರೊಂದಿಗೆ ಸೇರಿ ಸಹ ಬೋಧನೆ ಮಾಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಪರಿಸರ ಸಾಕ್ಷರತೆಯ ಬಗ್ಗೆ ಅರಿವು ಮೂಡಿಸುವ ಪ್ರಯತ್ನವೊಂದನ್ನು ನಡೆಸಲಾಯಿತು. ಆ ಅನುಭವನ್ನು ನಾನಿಲ್ಲಿ ಹಂಚಿಕೊಳ್ಳುತ್ತಿದ್ದೇನೆ.

## ಪರಿಸರ ಸಾಕ್ಷರತೆಯನ್ನು ಉತ್ತೇಜಿಸುವುದು

ನನ್ನ ಈ ಪ್ರಯತ್ನದ ಹಿಂದಿನ ಉದ್ದೇಶವು, ಮಕ್ಕಳಿಗೆ ಅವರ ಸುತ್ತಲಿನ ಪ್ರಪಂಚದೊಂದಿಗೆ ಸಂವಾದ ನಡೆಸಲು ಅವಕಾಶ ಮಾಡಿಕೊಡುವುದಾಗಿತ್ತು. ಹೀಗೆ ಮಾಡಲು, ಮಕ್ಕಳು ತಮ್ಮ ಸುತ್ತಮುತ್ತ ಏನಾಗುತ್ತಿದೆ ಎಂಬುದರ ಅವಲೋಕನ, ದಾಖಲೆ ಮತ್ತು ಪರ್ಯಾಲೋಚನೆ ಮಾಡುವುದು ಅವಶ್ಯವಾಗಿತ್ತು. ಇದರ ನಂತರ, ಈ ಅವಲೋಕನಗಳ ಹಿಂದಿನ ಸಂಭಾವ್ಯ ಕಾರಣಗಳ ಕುರಿತು ಪರ್ಯಾಲೋಚನೆ ನಡೆಸಬೇಕು; ಕಾರಣಗಳನ್ನು ಪರಿಶೀಲಿಸುವ ವಿಧಾನಗಳನ್ನು ಕಲಿಯಬೇಕು; ಕಾರಣಗಳು ಮತ್ತು ಘಟನೆಗಳ ನಡುವೆ ಏನಾದರೂ ಸಂಬಂಧ ಇದೆಯೇ ಎಂಬುದನ್ನು ಚರ್ಚಿಸಬೇಕು; ಆ ಬಳಿಕ ಪರಿಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ಕ್ರಿಯಾಶೀಲವಾಗಿ ಮತ್ತು ಸೂಕ್ಷ್ಮತೆಯಿಂದ ಪರಿಹಾರಗಳನ್ನು ಕಂಡುಹಿಡಿಯಬೇಕು. ಸಂಕ್ಷಿಪ್ತವಾಗಿ ಹೇಳುವುದಾದರೆ, ನಮ್ಮ ನೈಸರ್ಗಿಕ ಪರಿಸರವನ್ನು ಉತ್ತಮಪಡಿಸಲು ಹಾಗೂ ಸುರಕ್ಷಿತವಾಗಿಡಲು ಮಕ್ಕಳಿಗೂ ಅವಕಾಶ ನೀಡಬೇಕು.

## ಸನ್ನಿವೇಶಗಳು, ಸಂವಾದಗಳು ಮತ್ತು ಕಾರ್ಯಗಳು

ನಾನು ಶಿಕ್ಷಕರೊಬ್ಬರೊಂದಿಗೆ ಪರಿಸರ ಸಾಕ್ಷರತೆಯ ಬಗ್ಗೆ ಯೋಜನೆ ರೂಪಿಸುವಾಗ, ಛತ್ತೀಸ್‌ಗಢದ ಜಲ ಮೂಲಗಳ ಬಗ್ಗೆ ಸುದ್ದಿ ಪತ್ರಿಕೆಯೊಂದರಲ್ಲಿ ಓದುತ್ತಿದ್ದೆ. ಆ ದತ್ತಾಂಶದ ಪ್ರಕಾರ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ 2000ನೇ ಇಸವಿಯಲ್ಲಿ 2.79 ಲಕ್ಷ ಕೊಳಗಳಿದ್ದವು. ಆದರೆ 2020ರ ಹೊತ್ತಿಗೆ ಈ ಸಂಖ್ಯೆಯು 1.34 ಲಕ್ಷಕ್ಕೆ ಇಳಿದಿತ್ತು. ಕೊಳಗಳ ಜೊತೆಗೆ ಕೆರೆಗಳ ಸಂಖ್ಯೆಯೂ ಇಳಿದಿತ್ತು.

ನೀರಿನ ಸಂರಕ್ಷಣೆಯಲ್ಲಿ ಕೊಳಗಳು, ಕಾಲುವೆಗಳು ಮತ್ತು ಕೆರೆಗಳು ಪ್ರಮುಖ ಪಾತ್ರ ವಹಿಸುತ್ತವೆ ಎನ್ನುವುದು ಎಲ್ಲರಿಗೂ ಗೊತ್ತಿರುವ ವಿಚಾರ. ಈ ಜಲಮೂಲಗಳ ಇಳಿಕೆ ಅಥವಾ ಕಣ್ಮರೆಯ ಕಾರಣ ಅನೇಕ ಸ್ಥಳಗಳಲ್ಲಿ ಅಂತರ್ಜಲದ ಮಟ್ಟ ವಿಪರೀತವಾಗಿ ಕುಸಿದಿದೆ. ಇದರ ಪರಿಣಾಮವಾಗಿ ರಾಜ್ಯದಲ್ಲಿ ಅನೇಕ ಬಾವಿಗಳು ಮತ್ತು ಕೈ ಪಂಪುಗಳು ಮತ್ತು 'ಪಟ್ವಾನ್'(ಪುರಸಭೆಯ ಜಲ ಮೂಲ) ಇತ್ಯಾದಿ ವಿವಿಧ ಜಲ ಮೂಲಗಳು ಬತ್ತಿ ಹೋಗಿವೆ. ಹೀಗಾಗಿ ಇಲ್ಲಿ ನಿರಂತರವಾಗಿ ನೀರಿನ ಕೊರತೆಯ ಸಮಸ್ಯೆ ಕಾಣಿಸಿಕೊಳ್ಳುತ್ತಿದೆ.

ನಾನು ಭೇಟಿ ನೀಡಿದ ಶಾಲೆಗಳ ಪರಿಸರವನ್ನು ಗಮನಿಸಿದಾಗ, ಅಲ್ಲಿ ನೀರು ಸುಲಭವಾಗಿ ದೊರೆಯುತ್ತಿಲ್ಲ ಎಂಬುದು ನನಗೆ ತಿಳಿಯಿತು. ಸರ್ಕಾರವು ಅಳವಡಿಸಿದ ನಲ್ಲಿಗಳಲ್ಲಿ ನಿರ್ದಿಷ್ಟ ಸಮಯದಲ್ಲಿ ಮಾತ್ರವೇ ನೀರು ಬರುತ್ತದೆ. ಆ ಸಮಯದಲ್ಲಿ ಯಾರಾದರೂ ನೀರು ಹಿಡಿದು ತುಂಬಿಕೊಳ್ಳದಿದ್ದರೆ ಅವರಿಗೆ ನೀರು ಸಿಗಲಾರದು, ವಿಶೇಷವಾಗಿ ಕುಡಿಯುವ ನೀರು ಇಲ್ಲದಂತಾಗುತ್ತದೆ. ಬೇಸಿಗೆ ಕಾಲದಲ್ಲಿ ಈ ಪರಿಸ್ಥಿತಿ ಇನ್ನೂ ಹದಗೆಡುತ್ತದೆ ಹಾಗೂ ನೀರಿನ ಸರಬರಾಜಿಗಾಗಿ ಜನರು ನೀರಿನ ಟ್ಯಾಂಕರ್‌ಗಳನ್ನು ಅವಲಂಬಿಸಬೇಕಾಗುತ್ತದೆ. ಹೀಗಾಗಿ ಮೇಲಿನ ಸನ್ನಿವೇಶ ಮತ್ತು ಪರಿಸರ ಕುರಿತ ಸಾಕ್ಷರತೆಯನ್ನು ಮೂಲಭೂತ ಶಿಕ್ಷಣದೊಂದಿಗೆ ಸಂಯೋಜಿಸಲು ನಾನು ನಿರ್ಧರಿಸಿದೆ. ಐದನೇ ತರಗತಿಯ 27 ಮಕ್ಕಳೊಂದಿಗೆ ನನ್ನ ಕೆಲಸವನ್ನು ಪ್ರಾರಂಭಿಸಿದೆ. ನನ್ನ ಯೋಜನೆಯ ಪ್ರಧಾನ ವಸ್ತುವು ಜಲಮೂಲಗಳ, ವಿಶೇಷವಾಗಿ ಕೊಳಗಳ ಕೊರತೆ ಆಗಿತ್ತು.

ಈ ಭೇಟಿಯ ವೇಳೆ ಒಂದಷ್ಟು ಆಸಕ್ತಿಕರ ವಿಚಾರಗಳು ಘಟಿಸಿದವು. ಪ್ರತಿ ವರ್ಷದಂತೆ ಮಕ್ಕಳು ಅಂತಿಮ ಪರೀಕ್ಷೆಗಳ ನಂತರ ತಮ್ಮ ಸಂಬಂಧಿಕರ ಮನೆಗೆ ಭೇಟಿ ನೀಡಲು ಯೋಜನೆ ರೂಪಿಸುತ್ತಿದ್ದರು. ಅವರಲ್ಲಿ ಹೆಚ್ಚಿನವರು ಸೋದರ ಮಾವನ

ಮನೆಗೆ ಹೋಗುವವರಿದ್ದರು. ಹೀಗಾಗಿ ನಾನು ಈ ಕೆಳಗಿನ ಮೂರು ಪ್ರಶ್ನೆಗಳನ್ನು ಕೇಳಿದೆ:

1. ಮಕ್ಕಳೇ ಈ ಬೇಸಿಗೆ ರಜೆಯಲ್ಲಿ ನೀವೆಲ್ಲ ಎಲ್ಲಿಗೆ ಹೋಗುತ್ತೀರಿ?
2. ನಿಮಗೆ ಯಾವ ಚಟುವಟಿಕೆ ಹೆಚ್ಚು ಇಷ್ಟ?
3. ಇಲ್ಲಿಯ ತನಕ ನೀವು ಎಷ್ಟು ಸಲ ಅಲ್ಲಿಗೆ ಹೋಗಿದ್ದೀರಿ? ಯಾವ ರೀತಿಯ ಬದಲಾವಣೆಗಳನ್ನು ನೀವು ಗಮನಿಸಿದ್ದೀರಿ? ಸುಮಾರು ನಾಲ್ಕು ತರಗತಿ ಅವಧಿಯವರೆಗೆ ಸಾಗಿದ ಚರ್ಚೆಯ ಕೆಲವೊಂದು ಆಯ್ದ ಭಾಗಗಳು ಇಲ್ಲಿವೆ.

ನನ್ನ ಪ್ರಶ್ನೆ : ಈಗ ಬೇಸಿಗೆ ರಜೆ. ನೀವೆಲ್ಲರೂ ಎಲ್ಲಿಗೆ ಹೋಗುತ್ತೀರಿ?

ಕೆಲವು ಮಕ್ಕಳು ಅವರ ಹಳ್ಳಿಗೆ ಅಥವಾ ಅವರ ಸಂಬಂಧಿಕರ ಮನೆಗಳಿಗೆ ಹೋಗುವುದಾಗಿ ಹೇಳಿದರು. ಕೆಲವು ಮಕ್ಕಳು ಸೋದರ ಮಾವನ ಊರಿಗೆ ಹೋಗುವುದಾಗಿ ಹೇಳಿದರು. ಇನ್ನು ಕೆಲವರು ಯಾರೋ ಸಂಬಂಧಿಕರ ಮದುವೆಗೆ ಹೋಗುವುದಾಗಿ ಹೇಳಿದರೆ, ಉಳಿದವರು ತಾವು ಎಲ್ಲಿಗೂ ಹೋಗುವುದಿಲ್ಲ ಎಂದರು.

ನಾನು ಕೇಳಿದೆ: ಒಳ್ಳೆಯದು! ನೀವು ಹೋಗಲಿರುವ ಊರುಗಳು ಯಾವುವು?

ಮಕ್ಕಳು ಜಾಮ್ಗಾಂವ್, ಸಂಕರ, ಧಮ್‌ತರಿ, ಪಹಂದ ಮತ್ತು ಭೂತಾಲ ಸೇರಿದಂತೆ ಅನೇಕ ಸ್ಥಳಗಳ ಹೆಸರುಗಳನ್ನು ಹೇಳಿದರು.

ನಾನು ಕೇಳಿದೆ: ನೀವು ಪ್ರತಿ ವರ್ಷ ಅಲ್ಲಿಗೆ ಹೋಗುತ್ತೀರಾ? ಅಲ್ಲಿಗೆ ಹೋದಾಗ ನೀವು ಏನು ಮಾಡುತ್ತೀರಿ?

ಮಕ್ಕಳು ಅವರ ಚಟುವಟಿಕೆಗಳನ್ನು ಕುತೂಹಲದಿಂದ ವಿವರಿಸಿದರು – ಆಟವಾಡುವುದು, ಹಸುವಿನ ತಾಜಾ ಹಾಲನ್ನು ಕುಡಿಯುವುದು, ಅಜ್ಜಿ ಮನೆಯಲ್ಲಿ ಮಾಡಿದ ವಿವಿಧ ಬಗೆಯ ತಿಂಡಿ ತಿನಿಸುಗಳನ್ನು ಸವಿಯುವುದು ಮತ್ತು ಕೊಳಗಳಲ್ಲಿ ಸ್ನಾನ ಮಾಡುವುದು ಹಾಗೂ ಈಜಾಡುವುದು. ಅವರ ಮನೆಗಳ ಪಕ್ಕದಲ್ಲಿ ಎಲ್ಲೂ ಈಜಾಡಲು ಜಾಗವಿಲ್ಲ. ಆದರೆ ಹಳ್ಳಿಯಲ್ಲಿ ಈಜಾಡಲು ಮಾತ್ರವಲ್ಲದೆ ಬೆಳಗ್ಗೆ ಮತ್ತು ಸಂಜೆಯ ವೇಳೆ ಸ್ನಾನವನ್ನು ಸಹ ಮಾಡಬಹುದು ಎಂದು ಅವರು ತಿಳಿಸಿದರು. ನಾನು ಹೇಳಿದೆ: ವಾಹ್, ಎಂಥಾ ಮಜ! ಹಾಗಾದರೆ ನೀವು ಅಲ್ಲಿ ನಿಜಕ್ಕೂ ಸಾಕಷ್ಟು ಮೋಜು ಮಾಡ್ತೀರಾ. ನಿಮ್ಮ ಹಾಗೆಯೇ ನಾನು ಸಹ ನನ್ನ ರಜಾ ದಿನಗಳಲ್ಲಿ ಬಿಲಾಸ್ಪುರದಲ್ಲಿರುವ ನನ್ನ ಅಜ್ಜಿ ಮನೆಗೆ ಹೋಗುತ್ತಿದ್ದೆ. ಅಜ್ಜಿ ಮನೆಯಲ್ಲಿ ಅನೇಕ ಹಸುಗಳಿದ್ದವು ಹಾಗೂ ನಮಗೆ ಸಾಕಷ್ಟು ಹಾಲು, ಮೊಸರು ತುಪ್ಪ ಸಿಗುತ್ತಿತ್ತು. ಆದರೆ ನನಗೆ ಒಂದು ವಿಷಯ ಹೇಳಿ; ನೀವೆಲ್ಲರೂ ಅನೇಕ ವರ್ಷಗಳಿಂದ ನಿಮ್ಮ ಹಳ್ಳಿಗಳಿಗೆ ಹೋಗುತ್ತಿದ್ದೀರಾ. ಆವತ್ತಿಗೂ ಇವತ್ತಿಗೂ ನೀವೇನಾದರೂ ವ್ಯತ್ಯಾಸ ಕಂಡಿದ್ದೀರಾ?

ಅವರು ನನ್ನ ಪ್ರಶ್ನೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎಂಬುದು ಅವರ ಮೌನದಿಂದಲೇ ತಿಳಿಯಿತು. ಛತ್ತೀಸ್ಗಢಿ ಭಾಷೆಯಲ್ಲಿ ಶಿಕ್ಷಕರು ಅವರಿಗೆ ಸುಳಿವು ನೀಡಿದರು, 'ನೀವು ಈ ಹಿಂದೆ ಭೇಟಿ ನೀಡಿದಾಗ ಹಳ್ಳಿ ಹೇಗಿತ್ತು, ಈಗ ಹೋದಾಗ ನಿಮಗೆ ಹೇಗನಿಸುತ್ತದೆ?'

ಈಗ ಮಕ್ಕಳಿಂದ ಉತ್ತರಗಳ ಪ್ರವಾಹವೇ ಹರಿಯಿತು:

- ಕೊಳದ ನೀರು ಮೊದಲಿನಷ್ಟು ತಿಳಿಯಾಗಿ ಕಾಣಿಸುತ್ತಿಲ್ಲ.
- ಕೆರೆಗಳು ಹಿಂದೆ ದೊಡ್ಡವಾಗಿದ್ದವು, ಆದರೆ ಈಗ ಕ್ಷೀಣಿಸುತ್ತಿವೆ.
- ಕೊಳವನ್ನು ದನದ ಹಟ್ಟಿಯಾಗಿ ಪರಿವರ್ತಿಸಲಾಗಿದೆ.
- ದನದ ಕೊಟ್ಟಿಗೆ ಇದ್ದಲ್ಲಿ ಮನೆಯನ್ನು ಕಟ್ಟಲಾಗಿದೆ.

ಮಕ್ಕಳು ಚರ್ಚೆಯಲ್ಲಿ ಕುತೂಹಲದಿಂದ ಪಾಲ್ಗೊಂಡಿದ್ದನ್ನು ಕಂಡು ಶಿಕ್ಷಕರು ಆಶ್ಚರ್ಯಚಕಿತರಾದರು ಮತ್ತು ನನಗೆ ಹೇಳಿದರು, 'ನೋಡಿ ಮೇಡಂ, ಈಗ ಅವರೆಷ್ಟು ಚೆನ್ನಾಗಿ ಉತ್ತರ ನೀಡುತ್ತಿದ್ದಾರೆ! ಇಲ್ಲದಿದ್ದರೆ, ಪರಿಸರ ವಿಜ್ಞಾನವನ್ನು ಕಲಿತ ನಂತರವೂ ಅವರಿಗೆ ಉತ್ತರ ಬರೆಯಲು ಸಾಧ್ಯವಾಗುತ್ತಿರಲಿಲ್ಲ.' ಆಗ ನಾನು ಪರಸ್ಪರ ಸಂವಹನಕ್ಕಾಗಿ ಪರಿಚಿತ ಭಾಷೆಯಲ್ಲಿ ಮಾತನಾಡುವುದು ತುಂಬಾ ಅಗತ್ಯ ಎಂಬುದನ್ನು ಅರ್ಥ ಮಾಡಿಕೊಂಡೆ.

ಮಕ್ಕಳು ಮುಂದುವರಿಸಿದರು : ಮನೆಯ ಮುಂದಿನ ಜಗಲಿಯನ್ನು ಒಡೆದು ಮನೆಯನ್ನು ದೊಡ್ಡದಾಗಿ ಮಾಡಲಾಗಿದೆ ಹಾಗೂ ದೊಡ್ಡ ಮನೆಗಳನ್ನು ನಿರ್ಮಿಸುವುದಕ್ಕಾಗಿ ಮರಗಳನ್ನು ಕಡಿಯಲಾಗಿದೆ. ಹಾಗಾಗಿ, ಆಟವಾಡಿ ಆಯಾಸಗೊಂಡ ನಂತರ ನಾವು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಸ್ಥಳವೂ ಸಹ ಈಗ ಕಾಣೆಯಾಗಿದೆ. ಕೋವಿಡ್ 19 ಸಾಂಕ್ರಾಮಿಕ ಮಹಾಮಾರಿಯ ದಿನಗಳಲ್ಲಿ ಹಣಕಾಸಿನ ತೊಂದರೆಯಿಂದ ಕೆಲವು ಕುಟುಂಬಗಳು ಅವರ ತೋಟಗಳು ಮತ್ತು ದನಕರುಗಳನ್ನು ಮಾರಬೇಕಾಯಿತು. ಹಾಗಾಗಿ ಈಗ ಅಲ್ಲಿರುವ ಮಾವಿನ ಹಣ್ಣುಗಳು ಮತ್ತು ಇತರ ಹಣ್ಣುಗಳನ್ನು ಕೀಳುವಂತಿಲ್ಲ ಎಂದೂ ಸಹ ಕೆಲವು ಮಕ್ಕಳು ಹೇಳಿದರು. ಈಗ, ರಜಾ ದಿನಗಳಲ್ಲಿ ಎಲ್ಲೂ ಹೋಗದೆ ತಮ್ಮ ಮನೆಗಳಲ್ಲೇ ಉಳಿಯುವ ಮಕ್ಕಳು ಮಾತನಾಡುವ ಸರದಿ ಬಂದಿತ್ತು. ಈಗ ಅವರು ಚಿಕ್ಕ ತಮ್ಮ ತಂಗಿಯರ ಆರೈಕೆ ಮಾಡಲು ಮತ್ತು ಮನೆಯ ಕೆಲಸದಲ್ಲಿ ಪೋಷಕರಿಗೆ ಸಹಾಯ ಮಾಡುವುದಕ್ಕಾಗಿ ಮನೆಯಲ್ಲೇ ಉಳಿಯಬೇಕಾಗಿತ್ತು. ತಮ್ಮಲ್ಲೂ ನೀರಿನ ಕೊರತೆ ಇದ್ದು, ಬೇಸಿಗೆ ಕಾಲದಲ್ಲಿ ನೀರನ್ನು ತುಂಬುವುದು, ಒಯ್ಯುವುದು ಹಾಗೂ ಶೇಖರಿಸುವುದು ಮುಂತಾದ ಕೆಲಸವನ್ನು ತಾವು ಮಾಡುವುದಾಗಿ ಅವರು ಹೇಳಿದರು. ಶಿಕ್ಷಕರು ಅವರ ಮಾತನ್ನು ಸಹಾನುಭೂತಿಯಿಂದ ಕೇಳಿದರು ಹಾಗೂ ನೀರಿನ ಕೊರತೆ

ಇರುವ ಛತ್ತೀಸ್ಗಢದ ಬೇರೆಬೇರೆ ಪ್ರದೇಶಗಳಲ್ಲಿ ಅವರು ಕೆಲಸ ಮಾಡಿರುವುದರಿಂದ ಈ ಮಕ್ಕಳ ಮಾತನ್ನು ಅವರು ಒಪ್ಪಿಕೊಂಡರು. ಅವರು ಮಕ್ಕಳಿಗೆ ಕೇಳಿದರು: ಕೊಳದಲ್ಲಿ ಕೊಳಕು ತುಂಬಿದೆ ಮಾತ್ರವಲ್ಲದೆ ಅದರ ಗಾತ್ರವೂ ಕುಗ್ಗಿದೆ ಎಂದು ನೀವು ಹೇಳುತ್ತೀರಿ; ಆದರೆ ಕೊಳವನ್ನು ಹೇಗೆ ರಕ್ಷಿಸಬಹುದು ಎಂದು ನೀವು ಹೇಳುತ್ತೀರಾ?

ಅವರು ಮಕ್ಕಳನ್ನು ಎರಡು ತಂಡಗಳಾಗಿ ವಿಂಗಡಿಸಿದರು. ಒಂದು ಗುಂಪನ್ನು ನಾವು ಕಾರ್ಯಕರ್ತರ ತಂಡ (Activity Group) ಎಂದು ಕರೆಯೋಣ. ನೆಲದಲ್ಲಿ ಗುಂಡಿಯೊಂದನ್ನು ತೋಡಿ ಅದರಲ್ಲಿ ನೀರನ್ನು ತುಂಬುವ ಕೆಲಸವನ್ನು ಆ ಗುಂಪಿಗೆ ನೀಡಲಾಯಿತು. ಅದು ಒಣಗಿದಾಗ, ಅದು ಒಣಗುವುದು ನಿಲ್ಲುವ ತನಕ ಇನ್ನಷ್ಟು ನೀರನ್ನು ಅದಕ್ಕೆ ಸುರಿಯಲಾಯಿತು. ಇನ್ನೊಂದು ಗುಂಪನ್ನು ಸಮೀಕ್ಷಾ ತಂಡ (Survey Group) ಎಂದು ಕರೆಯೋಣ. ಹಳ್ಳಿಗೆ ಹೋಗಿ, ಕೊಳದ ನೀರನ್ನು ಹೇಗೆ ಸ್ವಚ್ಛವಾಗಿಡಬಹುದು ಮತ್ತು ಕೊಳವನ್ನು ಹೇಗೆ ರಕ್ಷಿಸಬಹುದು ಎಂದು ಸಾರ್ವಜನಿಕರಲ್ಲಿ ಕೇಳಿಕೊಂಡು ಬರಲು ಈ ಗುಂಪಿಗೆ ಸೂಚಿಸಲಾಯಿತು.

## ಪ್ರಯೋಗದ ಫಲಿತಾಂಶಗಳು

ಎರಡೂ ತಂಡಗಳಿಗೆ ತಮ್ಮ ಅವಲೋಕನಗಳು ಮತ್ತು ವರದಿಗಳನ್ನು ಬರೆದು ತರಲು ತಿಳಿಸಲಾಯಿತು. ಎರಡನೇ ದಿನದಂದು ಮಕ್ಕಳು ತಮ್ಮ ಫಲಿತಾಂಶದೊಂದಿಗೆ ಸಿದ್ಧರಾಗಿದ್ದರು. ಅವುಗಳನ್ನು ಈ ರೀತಿ ಕ್ರೋಢೀಕರಿಸಬಹುದು.

1. ಮಣ್ಣನ್ನು ನಿರಂತರ ತೇವವಾಗಿ ಇರಿಸಿದ ಕಾರಣ ಗುಂಡಿಯಲ್ಲಿ ನೀರು ಉಳಿದುಕೊಂಡಿತು ಎಂಬುದು ಕಾರ್ಯಕರ್ತರ ತಂಡದ ಅವಲೋಕನವಾಗಿತ್ತು. ಅಂತರ್ಜಲವನ್ನು ಹೆಚ್ಚಿಸಬೇಕಾದರೆ ಕೊಳಗಳನ್ನು ಪುನಶ್ಚೇತನಗೊಳಿಸಿ ಅವುಗಳನ್ನು ಉಳಿಸಬೇಕು ಎಂದು ಹೇಳುವ ಮೂಲಕ ಶಿಕ್ಷಕರು ಮತ್ತು ನಾನು ಈ ಗುಂಡಿಯ ವಿಚಾರವನ್ನು ಕೊಳದೊಂದಿಗೆ ಸಮೀಕರಿಸಿದೆವು.

2. ಜನಸಂಖ್ಯೆಯಲ್ಲಿ ಹೆಚ್ಚಳ, ನಿರಂತರವಾಗಿ ತಾರಸಿ ಮನೆಗಳ ನಿರ್ಮಾಣ, ಮತ್ತು ಭೂಮಿಯ ದುರ್ಬಳಕೆ ಇತ್ಯಾದಿ ಪ್ರಮುಖ ಕಾರಣಗಳಿಂದಾಗಿ ಕೊಳಗಳು ಕಾಣೆಯಾಗುತ್ತಿವೆ ಎನ್ನುವುದು ಸಮೀಕ್ಷಾ ತಂಡದ ಉತ್ತರವಾಗಿತ್ತು. ಮರಗಳನ್ನು ಕಡಿಯದೆ ಅವುಗಳನ್ನು ಬೆಳೆಸುವುದು ಅತ್ಯಗತ್ಯ. ಕೊಳಗಳನ್ನು ಇನ್ನಷ್ಟು ಆಳಗೊಳಿಸಬೇಕೇ ಹೊರತು ಗೋಮಾಳ ಮಾಡುವುದಕ್ಕಾಗಿ ಅಥವಾ ಮನೆಯನ್ನು ಕಟ್ಟುವುದಕ್ಕಾಗಿ ಮಣ್ಣನ್ನು ತುಂಬಿಸುವುದಲ್ಲ.

## ಅಂತ್ಯವೇ ಆರಂಭ

ಕೊಳಗಳು ಹಿಂದಿನಂತಿಲ್ಲ ಹಾಗೂ ಅವುಗಳು ಮಲಿನಗೊಂಡಿವೆ ಎನ್ನುವ ವಿಷಯವು ಹೆಚ್ಚಿನ ಮಕ್ಕಳಿಗೆ ತಿಳಿದಿದೆ ಎನ್ನುವ ವಿಚಾರವು ಈ ಸಂವಾದದ ಮೂಲಕ ಹೊರಬಂತು. ಸಮಸ್ಯೆಗೆ ಉತ್ತರ ಪಡೆಯುವುದಕ್ಕಾಗಿ ಮಕ್ಕಳು ತಾವಾಗಿಯೇ ದಾರಿಯನ್ನು ಕಂಡು ಹಿಡಿದರು.

ಮಕ್ಕಳು ಓದಲು ಇಷ್ಟಪಡುವುದಿಲ್ಲ ಅಥವಾ ತರಗತಿಯಲ್ಲಿ ಮಾತನಾಡುವುದಿಲ್ಲ ಎನ್ನುವ ತಪ್ಪು ಗ್ರಹಿಕೆಯನ್ನು ಸಹ ಈ ಚಟುವಟಿಕೆಯು ದೂರ ಮಾಡಿತು. ಅವರ ಕುತೂಹಲಕ್ಕೆ ಅವಕಾಶ ನೀಡುವುದು, ಅವರ ಮಾತುಗಳನ್ನು ತಾಳ್ಮೆಯಿಂದ ಆಲಿಸಿಕೊಳ್ಳುವುದು ಹಾಗೂ ಅವರ ಪ್ರಶ್ನೆಗಳು ಮತ್ತು ಅನುಭವಗಳಿಗೆ ಗೌರವ ನೀಡುವುದು ಅಗತ್ಯ.ಇದು ಕೇವಲ ಒಂದು ಉದಾಹರಣೆಯಷ್ಟೇ. ಇಂತಹ ಅನೇಕ ವಿಚಾರಗಳನ್ನು ತರಗತಿಯಲ್ಲಿ ಚರ್ಚಿಸಿ ಪರಿಸರ ಮತ್ತು ಪರಿಸರವು ಎದುರಿಸುತ್ತಿರುವ ಸವಾಲುಗಳ ಕುರಿತು ಜಾಗೃತಿ ಮತ್ತು ಸಂವೇದನೆಯನ್ನು ರೂಪಿಸಬಹುದು. ಇಂತಹ ಅಭ್ಯಾಸಗಳು, ಪರಿಸರದ ಕುರಿತು ಅವರು ಹೊಂದಿರುವ ಕಾಳಜಿಯನ್ನು ವ್ಯಕ್ತಪಡಿಸಲು ಹಾಗೂ ಪರಿಸರದ ಗುಣಮಟ್ಟವನ್ನು ಸುಧಾರಿಸಲು ಅಥವಾ ಕಾಪಾಡಲು ಪ್ರೇರಣೆ ಪಡೆಯಲು ಸಹಾಯ ಮಾಡುತ್ತವೆ. ಮಕ್ಕಳು ಸಮೃದ್ಧ ಪರಿಸರದಲ್ಲಿ ಬೆಳೆಯಲು ನಾವು ಅವಕಾಶ ಕಲ್ಪಿಸಿಕೊಡಬೇಕಾದರೆ ಇನ್ನಿತರ ಸಾಕ್ಷರತೆಗಳಂತೆ ಪರಿಸರ ಕುರಿತ ಸಾಕ್ಷರತೆಯೂ ಅತ್ಯಗತ್ಯ.

ನನ್ನ ವೈಯಕ್ತಿಕ ಅನುಭವದ ಪ್ರಕಾರ ಪರಿಸರ ಕುರಿತ ಸಾಕ್ಷರತೆಯನ್ನು ಪ್ರಾಥಮಿಕ ಶಾಲೆಗಷ್ಟೇ ಸೀಮಿತ–ಗೊಳಿಸಲಾಗಿದೆ. ಆನಂತರದ ತರಗತಿಗಳಲ್ಲಿ ಪರಿಸರ ಜಾಗೃತಿಗೆ ಸಂಬಂಧಿಸಿದ ವಿಷಯಗಳ ಕೊರತೆ ಇದೆ. ತಮ್ಮ ಪಠ್ಯಕ್ರಮದ ಅಂಗವಾಗಿ ತಾವು ಕಲಿತ ಘಟನೆಗಳನ್ನು ಮಕ್ಕಳು ತಮ್ಮದೇ ಬದುಕಿನಲ್ಲಿ ಅನುಭವಿಸಿದಾಗ ಅವರು ಚೆನ್ನಾಗಿ ಕಲಿಯುತ್ತಾರೆ, ಮಾತ್ರವಲ್ಲದೆ ಕಲಿತಿರುವುದನ್ನು ನೆನಪಿಟ್ಟುಕೊಳ್ಳಲು ಅವರಿಗೆ ಸಾಧ್ಯವಾಗುತ್ತದೆ. ಪರಿಸರಕ್ಕೆ ಸಂಬಂಧಿಸಿದ ವಿಷಯಗಳನ್ನು ಹೇಗೆ ತರಗತಿಯೊಳಗಿನ ಸಂವಾದದ ಭಾಗವಾಗಿಸಬೇಕು ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕಾದ ಅಗತ್ಯವಿದೆ. ಇದನ್ನು ಗಂಭೀರವಾಗಿ ಪರಿಗಣಿಸದೆ ಇದ್ದರೆ, ಪರಿಸರ ಕುರಿತ ಸಾಕ್ಷರತೆಯನ್ನು ಶಾಲಾ ಪಠ್ಯಕ್ರಮದಲ್ಲಿ ಸೇರ್ಪಡೆ–ಗೊಳಿಸುವುದಕ್ಕಾಗಿ ಸರ್ವೋಚ್ಚ ನ್ಯಾಯಾಲಯವು 1991ರಲ್ಲಿ ಮಧ್ಯಪ್ರವೇಶ ಮಾಡುತ್ತಿರಲಿಲ್ಲ.

**ಪರಾಮರ್ಶನ:**
ಕೊಠಾರಿ ಆಯೋಗದ ವರದಿ, 1964-1966
ರಾಷ್ಟ್ರೀಯ ಶಿಕ್ಷಣ ನೀತಿ, 1968
ಸಾರ್ವಜನಿಕ ಹಿತಾಸಕ್ತಿ ದಾವೆ, 1991
ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು, 2005
ಹೊಸ ಶಿಕ್ಷಣ ನೀತಿ, 2020



**ಅಂಜು ದಾಸ್ ಮಾಣಿಕ್‌ಪುರಿ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ರಾಯಪುರದ ಜಿಲ್ಲಾ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಅವರು ರಸಾಯನ ಶಾಸ್ತ್ರದಲ್ಲಿ ಪಿ.ಹೆಚ್.ಡಿ ಮಾಡಿದ್ದು, ಇದಕ್ಕೂ ಮೊದಲು ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ರಸಾಯನಶಾಸ್ತ್ರವನ್ನು ಬೋಧಿಸುತ್ತಿದ್ದರು. ವಿಜ್ಞಾನ ಮಾತ್ರವಲ್ಲದೆ ಅವರು ಭಾಷೆ ಮತ್ತು ಗಣಿತಶಾಸ್ತ್ರದ ಬೋಧನೆಯಲ್ಲಿಯೂ ತೊಡಗಿಸಿಕೊಂಡಿದ್ದಾರೆ. ಅವರು ವಿಜ್ಞಾನದಲ್ಲಿ (ಮುಖ್ಯವಾಗಿ ಪರಿಸರ ವಿಜ್ಞಾನದಲ್ಲಿ) ಆಸಕ್ತಿ ಹೊಂದಿದ್ದಾರೆ. ಇವರನ್ನು anju.manikpuri@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** | ಪರಿಶೀಲನೆ: **ನಾಗಮಣಿ ಎಸ್.ಎನ್.**